## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 992 |
| 2 | ಸದಸ್ಯರ ಹೆಸರು | : | ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂಧಿದವರು) |
| 3 | ಉತ್ತರಿಸುವ ದಿನಾಂಕ | : | 12-03-2020 |
| 4 | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೃಹತ್ ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಪ್ರತಿ ನಿತ್ಯ ಎಷ್ಟು ಟನ್ ಕಸ ಸಂಗ್ರಹವಾಗುತ್ತಿದೆ; (ಮಾಹಿತಿ ನೀಡುವುದು) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಪ್ರತಿನಿತ್ಯ ಸುಮಾರು 4000-4500 ಮೆ.ಟನ್ ತ್ಯಾಜ್ಯ ಸಂಗ್ರಹವಾಗುತ್ತಿದೆ. |
| ಆ) | ಈ ಸಂಗ್ರಹವಾಗುತ್ತಿರುವ ಕಸವನ್ನು ವೈಜ್ಞಾನಿಕವಾಗಿ ಎಲ್ಲಿ ವಿಲೇವಾರಿ ಮಾಡಲಾಗುತ್ತಿದೆ; ಎಷ್ಟು ಟನ್ ಕಸವನ್ನು ವಿಲೇವಾರಿ ಮಾಡಲಾಗುತ್ತಿದೆ; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಉತ್ಪತ್ತಿಯಾಗುತ್ತಿರುವ ಘನತ್ಯಾಜ್ಯವನ್ನು ವೈಜ್ಞಾನಿಕವಾಗಿ ಸಂಸ್ಕರಿಸಲು ಪಾಲಿಕೆ ವತಿಯಿಂದ ಎಲ್ಲಾ ರೀತಿಯ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ಈ ನಿಟ್ಟಿನಲ್ಲಿ ಕೆಳಕಂಡ ಸ್ಥಳಗಳಲ್ಲಿ ತ್ಯಾಜ್ಯ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಲಾಗಿರುತ್ತದೆ.<br><br>1. ಕೆ.ಸಿ.ಡಿ.ಸಿ (ಕೂಡ್ಲು), ಕನ್ನಹಳ್ಳಿ, ಸೀಗೇಹಳ್ಳಿ, ಸುಬ್ಬರಾಯನಪಾಳ್ಯ, ಚಿಕ್ಕನಾಗಮಂಗಲ, ಲಿಂಗಧೀರನಹಳ್ಳಿ ಮತ್ತು ದೊಡ್ಡಬಿದರಕಲ್ಲು ಗೊಬ್ಬರ ತಯಾರಿಕಾ ಘಟಕಗಳಲ್ಲಿ ಒಟ್ಟಾರೆ 600 ಮೆ.ಟನ್ ತ್ಯಾಜ್ಯವನ್ನು ಸಂಸ್ಕರಿಸಲಾಗುತ್ತಿದೆ.<br><br>2. ಗಾಂಧಿನಗರ, ಜಯನಗರ, ಬೇಗೂರು, ಕೆ.ಸಿ.ಡಿ.ಸಿ, ಕೂಡ್ಲು, ವರ್ತೂರು, ಲಿಂಗಧೀರನಹಳ್ಳಿ, ನಾಗಪುರ, ದೊಮ್ಮಲೂರು, ಕೋರಮಂಗಲ, ಕೆ.ಆರ್.ಮಾರುಕಟ್ಟೆ, ಮತ್ತಿಕೆರೆ ಮತ್ತು ಕುವೆಂಪುನಗರ ದಲ್ಲಿ ಪ್ರತಿದಿನ 5 ಟನ್ ಹಸಿ ತ್ಯಾಜ್ಯದಿಂದ ಜೈವಿಕ ಅನಿಲ ಉತ್ಪಾದಿಸುವ ಘಟಕ.<br><br>3. ದೊಡ್ಡಬಳ್ಳಾಪುರ ತಾಲ್ಲೂಕು, ದೊಡ್ಡಬೆಳವಂಗಲ ಹೋಬಳಿ, ಭಕ್ತರಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಚಿಗರನಹಳ್ಳಿ ಗ್ರಾಮದಲ್ಲಿ ಪ್ರತಿದಿನ 500 ಮೆ.ಟನ್ ಸಂಸ್ಕರಿಸುವ ಸಾಮರ್ಥ್ಯದ ಸಮಗ್ರ ಘನತ್ಯಾಜ್ಯ ಸಂಸ್ಕರಣಾ ಘಟಕವನ್ನು ಮೆ॥ ಎಂ.ಎಸ್.ಜಿ.ಪಿ ಇನ್‌ಫ್ರಾಟೆಕ್ ಪ್ರೈ.ಲಿ ಸಂಸ್ಥೆಯವರ ಸ್ವಂತ ಜಾಗದಲ್ಲಿ ಸ್ಥಾಪಿಸಲಾಗಿದೆ.<br><br>4. ವಾರ್ಡ್ ನಂ. 94, ಗಾಂಧಿನಗರ, ಪಶ್ಚಿಮ ವಲಯದಲ್ಲಿ ಪ್ರತಿದಿನ 25 ಟನ್ ತೆಂಗಿನ ಚಿಪ್ಪು ಮತ್ತು ಮರದ ಕೊಂಬೆಗಳಿಂದ ಜೈವಿಕ ಇಂಧನ (Bio fuel through Pelletisation) ಉತ್ಪಾದಿಸುವ ಘಟಕ. |

| | | |
|---|---|---|
| ಇ) | ಎಲ್ಲಿ ಎಲ್ಲಿ ಡಂಪಿಂಗ್ ಯಾರ್ಡ್‌ಗಳಿವೆ; ಒಂದೊಂದು ಡಂಪಿಂಗ್ ಯಾರ್ಡ್‌ನಲ್ಲಿ ಎಷ್ಟು ಕಸವನ್ನು ವಿಲೇವಾರಿ ಮಾಡುವ ಸಾಮರ್ಥ್ಯವಿದೆ ಎಂಬ ಬಗ್ಗೆ ಸಂಪೂರ್ಣ ಮಾಹಿತಿ ನೀಡುವುದು; | • ಬಾಗಲೂರು ಸರ್ವೇ ನಂ. 176 ರ ಕ್ವಾರಿ ಗುಂಡಿಯ ವೈಜ್ಞಾನಿಕ ಭೂಭರ್ತಿ ಘಟಕದ ಸಾಮರ್ಥ್ಯ 260650 ಘನ ಮೀಟರ್‌ನಷ್ಟು ಇರುತ್ತದೆ. ರಾಷ್ಟ್ರೀಯ ಹಸಿರು ನ್ಯಾಯಾಧೀಕರಣದ ತಡೆಯಾಜ್ಞೆಯಂತೆ ಸದರಿ ಭೂಭರ್ತಿ ಘಟಕವು ಆಗಸ್ಟ್-2017 ರಿಂದ ಸ್ಥಗಿತಗೊಂಡಿರುತ್ತದೆ.<br>• ಬೆಳ್ಳಹಳ್ಳಿ ಸರ್ವೇ ನಂ. 13ರ ಕ್ವಾರಿ ಗುಂಡಿಯ ವೈಜ್ಞಾನಿಕ ಭೂಭರ್ತಿ ಘಟಕದ ಸಾಮರ್ಥ್ಯ 2017944 ಘನ ಮೀಟರ್ ನಷ್ಟು ಇರುತ್ತದೆ.<br>• ಮಿಟ್ಟಗಾನಹಳ್ಳಿ ಸರ್ವೇ ನಂ. 02ರ ಕ್ವಾರಿ ಗುಂಡಿಯ ವೈಜ್ಞಾನಿಕ ಭೂಭರ್ತಿ ಘಟಕದ ಸಾಮರ್ಥ್ಯ 737241 ಘನ ಮೀಟರ್ ನಷ್ಟು ಇರುತ್ತದೆ.<br>• ಬಾಗಲೂರು ಸರ್ವೇ ನಂ. 271ರ 425000 ಘನ ಮೀಟರ್‌ನಷ್ಟು ಸಾಮರ್ಥ್ಯವಿದ್ದು, ಸದರಿ ಭೂಭರ್ತಿ ಘಟಕದ ಕಾಮಗಾರಿಗಳಿಗೆ ಟೆಂಡರ್ ಆಹ್ವಾನಿಸಬೇಕಾಗಿರುತ್ತದೆ.<br>• ಹುಲ್ಲಹಳ್ಳಿ ಸರ್ವೇ ನಂ. 44 ರ 218244 ಘನ ಮೀಟರ್‌ನಷ್ಟು ಸಾಮರ್ಥ್ಯವಿದ್ದು, ಸದರಿ ಭೂಭರ್ತಿ ಘಟಕದ ಕಾಮಗಾರಿಗಳಿಗೆ ಟೆಂಡರ್ ಆಹ್ವಾನಿಸಬೇಕಾಗಿರುತ್ತದೆ. |
| ಈ | ಸಂಗ್ರಹವಾಗುವ ಕಸ ವಿಲೇವಾರಿ ಮಾಡಲು ಪ್ರತಿ ವರ್ಷ ಖರ್ಚಾಗುತ್ತಿರುವ ಹಣವೆಷ್ಟು; (ವಿವರ ನೀಡುವುದು) | (ರೂ. ಕೋಟಿಗಳಲ್ಲಿ) (see table below) |
| ಉ | ಬೃಹತ್ ಮಹಾನಗರ ಪಾಲಿಕೆಯು ವೈಜ್ಞಾನಿಕವಾಗಿ ಕಸ ವಿಲೇವಾರಿ ಮಾಡದಿರುವ ವೈಫಲ್ಯವನ್ನು ಮಾನ್ಯ ಉಚ್ಚ ನ್ಯಾಯಾಲಯವು ವಿಧಿಸಿರುವ ನಿರ್ಬಂಧದ ಎಚ್ಚರಿಕೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಊ | ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡಿರುವ ಕ್ರಮವೇನು? (ವಿವರ ನೀಡುವುದು) | ಆಧುನಿಕ ತಂತ್ರಜ್ಞಾನ ಬಳಸಿಕೊಂಡು ತ್ಯಾಜ್ಯದಿಂದ ವಿದ್ಯುತ್/ ಗೊಬ್ಬರ ಉತ್ಪಾದಿಸುವ ಘಟಕಗಳನ್ನು ಸ್ಥಾಪಿಸಲು ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>1. ಸರ್ವೆ ನಂ.85 ಕನ್ನಹಳ್ಳಿಯಲ್ಲಿರುವ ಪಾಲಿಕೆಯ ಗೊಬ್ಬರ ಉತ್ಪಾದಿಸುವ ಘಟಕವನ್ನು ಪ್ರತಿದಿನ 1000 ಮೆ.ಟನ್ ತ್ಯಾಜ್ಯ ಸಂಸ್ಕರಿಸಿ ವಿದ್ಯುತ್ ಉತ್ಪಾದಿಸುವ ಘಟಕ ಸ್ಥಾಪನೆ (ಮೆ॥ ಸತಾರೆಂ ಎಂಟರ್‌ಪ್ರೈಸಸ್).<br>2. ದೊಡ್ಡಬಿದರಕಲ್ಲು ಗ್ರಾಮದ ಪಾಲಿಕೆಯ ಜಾಗದಲ್ಲಿ ಪ್ರತಿದಿನ 100 ಮೆಟ್ರಿಕ್ ಟನ್ ಘನತ್ಯಾಜ್ಯ ಸಂಸ್ಕರಿಸಿ ಗೊಬ್ಬರ, ಬಯೋಗ್ಯಾಸ್, ವಿದ್ಯುತ್ ಉತ್ಪಾದಿಸುವ ಘಟಕವನ್ನು ಸ್ಥಾಪಿಸುವ ಯೋಜನೆ (M/s Indium). |

(ರೂ. ಕೋಟಿಗಳಲ್ಲಿ)

| ವರ್ಷಗಳು | ಪಾಲಿಕೆಯ ಅನುದಾನ | ಸರ್ಕಾರದ ಅನುದಾನ | **ಒಟ್ಟು ಮೊತ್ತ** |
|---|---|---|---|
| 2016-17 | 383.00 | 189.00 | **572.00** |
| 2017-18 | 402.00 | 507.00 | **909.00** |
| 2018-19 | 393.00 | 442.00 | **835.00** |
| 2019-20 | 363.00 | 116.00 | **479.00** |

| | | |
|---|---|---|
| | | 3. ಮಾವಳ್ಳಿಪುರ ಗ್ರಾಮದ ಪಾಲಿಕೆಯ ಜಾಗದಲ್ಲಿ ಪ್ರತಿದಿನ 500 ಮೆಟ್ರಿಕ್ ಟನ್ ಘನತ್ಯಾಜ್ಯ ಸಂಸ್ಕರಿಸಿ ಗೊಬ್ಬರ, ಬಯೋಗ್ಯಾಸ್, ವಿದ್ಯುತ್ ಉತ್ಪಾದಿಸುವ ಘಟಕವನ್ನು ಸ್ಥಾಪಿಸುವ ಯೋಜನೆ (M/s NEG).<br>4. ಚಿಕ್ಕನಾಗಮಂಗಲ ಗ್ರಾಮದ ಪಾಲಿಕೆಯ ಜಾಗದಲ್ಲಿ ಪ್ರತಿದಿನ 500 ಮೆಟ್ರಿಕ್ ಟನ್ ಘನತ್ಯಾಜ್ಯ ಸಂಸ್ಕರಿಸಿ ಗೊಬ್ಬರ ಮತ್ತು ವಿದ್ಯುತ್ ಉತ್ಪಾದಿಸುವ ಘಟಕವನ್ನು ಸ್ಥಾಪಿಸುವ ಯೋಜನೆ (M/s 3 Wayste). |

**ಸಂಖ್ಯೆ: ನಅಇ 38 ಎಂಎನ್‌ವೈ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ.)

ಮುಖ್ಯಮಂತ್ರಿ